


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1832 (2099)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಸಕ್ಕರೆ ಕಾರ್ಖಾನೆಗಳಿಂದ ವಿದ್ಯುತ್ ಖರೀದಿಸುವಾಗ ನಿಗದಿಪಡಿಸುವ ದರದ ಕುರಿತು

(ಅ) ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆಗಳಿಂದ ವಿದ್ಯುತ್ ಖರೀದಿಸುವಾಗ "ಕರ್ನಾಟಕ ಇಲೆಕ್ಟ್ರಿಸಿಟಿ ರೆಗ್ಯುಲೇಟರಿ ಕಮೀಷನ್" (KERC)ಯು ಯಾವ ಆಧಾರದ ಮೇಲೆ ಮತ್ತು ಯಾವ ಮಾನದಂಡಗಳನ್ನು ಅನುಸರಿಸಿ, ವಿದ್ಯುತ್ ಖರೀದಿಯ ದರವನ್ನು ನಿಗದಿಪಡಿಸಲಾಗುತ್ತದೆ;

(ಆ) ಪವನ ವಿದ್ಯುತ್ ಸ್ಥಾವರ ಮತ್ತು ಸೌರ ವಿದ್ಯುತ್ ಸ್ಥಾವರಗಳಿಂದ ಖರೀದಿಸುವ ವಿದ್ಯುತ್ತಿಗೆ ಯಾವ ಮಾನದಂಡಗಳನ್ನು ಅನುಸರಿಸಿ ಪ್ರತಿ ಯೂನಿಟ್‌ಗೆ ದರವನ್ನು ನಿಗದಿಪಡಿಸಲಾಗುತ್ತಿದೆ ; ಮತ್ತು ಪ್ರತಿ ಯೂನಿಟ್‌ಗೆ ವಿದ್ಯುತ್ ದರವೆಷ್ಟು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಸಕ್ಕರೆ ಕಾರ್ಖಾನೆಗಳಿಂದ ವಿದ್ಯುತ್ ಖರೀದಿಸುವಾಗ "ವಿದ್ಯುತ್ ಖರೀದಿ ಒಪ್ಪಂದ" (PPA-Power Purchase Agreement) ಮಾಡಿಕೊಳ್ಳುವಾಗ ಯಾವ ನಿಯಮಗಳನ್ನು ಅನುಸರಿಸಲಾಗುತ್ತದೆ; ಮತ್ತು ಎಷ್ಟು ವರ್ಷಗಳಿಗೆ ಒಪ್ಪಂದ ಮಾಡಿಕೊಳ್ಳಲಾಗುವುದು;

(ಈ) ದೀರ್ಘಾವಧಿ ಮತ್ತು ಮಧ್ಯಮಾವಧಿ ಒಪ್ಪಂದಗಳಲ್ಲಿ "ವಿದ್ಯುತ್ ದರ" ವನ್ನು ಏಕರೂಪದಲ್ಲಿ ನಿಗದಿಪಡಿಸಲಾಗಿದೆಯೇ ; ಅಥವಾ ವಿದ್ಯುತ್ ದರಗಳಲ್ಲಿ ವ್ಯತ್ಯಾಸವಿದೆಯೇ ; ವ್ಯತ್ಯಾಸವಿದ್ದಲ್ಲಿ, ಅದಕ್ಕೆ ಕಾರಣಗಳೇನು ;

(ಉ) ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆಗಳಿಗೆ "ವಿದ್ಯುತ್ ದರ" ವನ್ನು ಏಕರೂಪದಲ್ಲಿ ನಿಗದಿಪಡಿಸಲಾಗಿದೆಯೇ ; ಅಥವಾ PPA ಪ್ರಕಾರ ಸಕ್ಕರೆ ಕಾರ್ಖಾನೆಗಳಿಗೆ ಪ್ರತ್ಯೇಕ ದರ ನಿಗದಿಪಡಿಸಲಾಗಿದೆಯೇ ; (ಸಂಪೂರ್ಣ ವಿವರ ನೀಡುವುದು)

(ಊ) ರಾಜ್ಯದ ಎಲ್ಲಾ ಸಕ್ಕರೆ ಕಾರ್ಖಾನೆಗಳೊಂದಿಗೆ PPAಮಾಡಿಕೊಳ್ಳಲಾಗಿದೆಯೇ ; ಇಲ್ಲವಾದಲ್ಲಿ, ಈಗಾಗಲೇ ಎಷ್ಟು ಸಕ್ಕರೆ ಕಾರ್ಖಾನೆಗಳೊಂದಿಗೆ PPAಮಾಡಿಕೊಳ್ಳಲಾಗಿದೆ ; ಮತ್ತು ಸದರಿ ಸಕ್ಕರೆ ಕಾರ್ಖಾನೆಗಳಿಗೆ PPA ಪ್ರಕಾರ ಯಾವ-ಯಾವ ದರಗಳನ್ನು ನಿಗದಿಪಡಿಸಲಾಗಿದೆ ; ಹಾಗೂ ಇನ್ನೂ PPA ಮಾಡಿಕೊಳ್ಳದೇ ಇರುವ ಸಕ್ಕರೆ ಕಾರ್ಖಾನೆಗಳ ಸಂಖ್ಯೆ ಎಷ್ಟು ; (ಸಂಪೂರ್ಣ ವಿವರ ನೀಡುವುದು)

(ಋ) PPA ಮಾಡಿಕೊಳ್ಳದೇ ಇರುವ ಸಕ್ಕರೆ ಕಾರ್ಖಾನೆಗಳು ಪೈಪೋಟಿ ದರದಲ್ಲಿ ಕಬ್ಬು ಬೆಳೆದ ರೈತನಿಗೆ "ಯೋಗ್ಯಬೆಲೆ" ನೀಡಲು ಸಾಧ್ಯವಾಗುತ್ತಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ೠ) ಇನ್ನುಳಿದ ಸಕ್ಕರೆ ಕಾರ್ಖಾನೆಗಳೊಂದಿಗೆ ಇಲ್ಲಿಯವರೆಗೂ PPAಮಾಡಿಕೊಳ್ಳದೇ ಇರಲು ಕಾರಣಗಳೇನು ; ಇನ್ನಾದರೂ ಸರ್ಕಾರ ಸದರಿ ಕಾರ್ಖಾನೆಗಳೊಂದಿಗೆ PPA ಮಾಡಿಕೊಳ್ಳಲು

ಅಗತ್ಯ ಕ್ರಮ ಕೈಗೊಳ್ಳುವುದೇ ;

(ಎ) ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಉಳಿದ ಕಾರ್ಖಾನೆಗಳೊಂದಿಗೆ PPA ಮಾಡಿಕೊಳ್ಳಲಾಗುವುದು ?